ಸದನದಲ್ಲಿ ಉತ್ತರಿಸುವ ಪ್ರಶ್ನೆ



**ಕರ್ನಾಟಕ ವಿಧಾನ ಪರಿಷತ್ತು**

ನೂರ ನಲವತ್ತೆರಡನೆಯ ಅಧಿವೇಶನ

ಬುಧವಾರ, ದಿನಾಂಕ: 09ನೇ ಡಿಸೆಂಬರ್, 2020

ಕೋಲಾರ ಜಿಲ್ಲೆಯ ಸರ್ವೇ ಇಲಾಖೆಗೆ ಮಂಜೂರಾಗಿರುವ ಹುದ್ದೆಗಳ ಬಗ್ಗೆ

ಶ್ರೀ ಗೋವಿಂದ ರಾಜು (ವಿಧಾನಸಭೆಯಿಂದ ಚುನಾಯಿತರಾದವರು) -

41 (323) ಕಂದಾಯ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ-

(ಅ) ಕೋಲಾರ ಜಿಲ್ಲೆಯ ಸರ್ವೇ ಇಲಾಖೆಗೆ ಮಂಜೂರಾಗಿರುವ ಒಟ್ಟು ಹುದ್ದೆಗಳ ಸಂಖ್ಯೆ ಎಷ್ಟು ; (ವೃಂದಗಳವಾರು ಮತ್ತು ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಆ) ಕೋಲಾರ ಜಿಲ್ಲೆಯ ಸರ್ವೇ ಇಲಾಖೆಯಲ್ಲಿ ಖಾಲಿ ಇರುವ ಒಟ್ಟು ಹುದ್ದೆಗಳ ಸಂಖ್ಯೆ ಎಷ್ಟು ; (ವೃಂದಗಳವಾರು ಮತ್ತು ತಾಲ್ಲೂಕುವಾರು ಸಂಪೂರ್ಣ ಮಾಹಿತಿ ನೀಡುವುದು)

(ಇ) ಕೋಲಾರ ತಾಲ್ಲೂಕಿನಲ್ಲಿ ಸರ್ವೇಯರ್‌ಗಳ ಹುದ್ದೆಗಳು ಖಾಲಿ ಇರುವುದರಿಂದ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಈ) ಹಾಗಿದ್ದಲ್ಲಿ, ಖಾಲಿ ಇರುವ ಹುದ್ದೆಗಳನ್ನು ತುಂಬಲು ಸರ್ಕಾರಕ್ಕಿರುವ ತೊಂದರೆಗಳೇನು ;

(ಉ) ಈ ಖಾಲಿ ಹುದ್ದೆಗಳನ್ನು ಯಾವ ಕಾಲಮಿತಿಯೊಳಗೆ ತುಂಬಲಾಗುವುದು ? (ಸಂಪೂರ್ಣ ಮಾಹಿತಿ ನೀಡುವುದು)